# ಗುಂಡಬಾಳದ ಶಾಸನ ಸಹಿತವಾದ ತೀರ್ಥಂಕರ ವಿಗ್ರಹಗಳು

**ಎಸ್. ಗಣಪತಿಗೌಡ**

ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನಲ್ಲಿರುವ ಗುಂಡಬಾಳವು ಹೊನ್ನಾವರದಿಂದ ಈಶಾನ್ಯಕ್ಕೆ ರಾಷ್ಟ್ರೀಯ ಹೆದ್ದಾರಿ ೧೯ರಲ್ಲಿ ಸುಮಾರು ೧೦ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೦ನೇ ಶತಮಾನದಿಂದ ಕ್ರಿ.ಶ. ೧೩ನೇ ಶತಮಾನದವರೆಗೆ ಗುಂಡಬಾಳವು, ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿತ್ತು ಎಂದು ಇಲ್ಲಿರುವ ಜಿನಾಲಯಗಳು, ಜಿನಶಿಲ್ಪಗಳು ಮತ್ತು ಶಿಲಾಶಾಸನಗಳಿಂದತಿಳಿಯುತ್ತದೆ.

ಇಲ್ಲಿ ಮೂರು ಶಿಲಾಶಾಸನಗಳು ದೊರಕಿದ್ದು ಈಗಾಗಲೇ ಎರಡನ್ನು ಡಾ॥ ಸದಾನಂದ ನಾಯಕರು ಪ್ರಕಟಿಸಿದ್ದಾರೆ[1]. ಇನ್ನೊಂದು ಅಪ್ರಕಟಿತ ಶಿಲಾಶಾಸನ.

ಪದ್ಮಾವತಿ ಅಮ್ಮನವರ ದೇವಾಲಯ ಎಂದು ಕರೆಯಲಾಗುವ ಇಲ್ಲಿಯ ಜೈನ ಬಸದಿಯಲ್ಲಿ ಒಟ್ಟು ನಾಲ್ಕು ತೀರ್ಥಂಕರ ವಿಗ್ರಹಗಳಿದ್ದು, ಎರಡು ತೀರ್ಥಂಕರ ವಿಗ್ರಹಗಳ ಪೀಠಗಳ ಮೇಲೆ ಚಿಕ್ಕ ಶಾಸನಗಳಿವೆ.

ಮೊದಲ ಶಿಲ್ಪವು ಕಪ್ಪು ಶಿಲೆಯಿಂದ ಕೆತ್ತಲ್ಪಟ್ಟಿದೆ. ತೀರ್ಥಂಕರನು ಸಿದ್ಧಾಸನದಲ್ಲಿ ಯೋಗಮುದ್ರೆಯಲ್ಲಿ ಕುಳಿತಿದ್ದಾನೆ. ಈ ಮೂರ್ತಿಯ ಎತ್ತರ ೯೬ ಸೆಂ.ಮಿ. ಜೊತೆಗೆ ಮಕರತೋರಣವು ಸೇರಿದಂತೆ ಒಟ್ಟು ೧೧೮ ಸೆಂ.ಮಿ. ಎತ್ತರವಿದೆ. ಅಗಲ ೭೬ ಸೆಂ.ಮಿ. ತೀರ್ಥಂಕರ ವಿಗ್ರಹದ ಪೀಠದ ಮೇಲೆ ಮೂರು ಸಾಲಿನ ಶಾಸನವಿದ್ದು, ಹೈವಲದೇವಿಯ ಮಗಳು ನಾಗಲದೇವಿಯ ಮಗನಾದ ಶ್ರೀಮತ್ ತ್ರಿಭುವನಮಲ್ಲ ಮಲ್ಲಿದೇವನಿಂದ ಸ್ಥಾಪಿಸಲ್ಪಟ್ಟಿತೆಂದೂ ಹೈವಲದೇವಿಯು ಮೂಲಸಂಘದ ಸೂರಸ್ಥ ಗಣದ ಚಾರುಕೀರ್ತಿ ಸಿದ್ಧಾಂತಿದೇವರ ಗುಡ್ಡಿ ಎಂದೂ ತಿಳಿಸುತ್ತದೆ. ಅರ್ಧ ನಿಮಿಲಿತ ನೇತ್ರಗಳು, ಸ್ವಲ್ಪ ದುಂಡಾದ ಮುಖ, ಮಂದಹಾಸ ಚೆಲ್ಲುವ ತುಟಿ, ನೀಳ ನಾಸಿಕ, ಭುಜದವರೆಗೂ ಇಳಿಬಿಟ್ಟ ಗುಂಗುರಾಕಾರದ ಕೇಶ, ವಿಶಾಲವಾದ ಎದೆ, ಬಲಿಷ್ಠವಾದ ಭುಜ, ಮೂರ್ತಿಯ ವೈಶಿಷ್ಟ್ಯವಾದರೆ, ಅಲಂಕೃತವಾದ ಮುಕ್ಕೊಡೆಯು ಪ್ರಭಾಮಂಡಲದ ಸೊಬಗನ್ನು ಹೆಚ್ಚಿಸಿದೆ.

ಅಷ್ಟೇ ರಮ್ಯವಾಗಿ ಮಕರತೋರಣವನ್ನು ಕೆತ್ತಿದ್ದಾರೆ. ಮಕರತೋರಣದ ಮೂಲದಲ್ಲಿ ಎರಡು ಅರ್ಧಗಂಬವಿದ್ದು, ಅದರ ಮೇಲೆ ಸಿಂಹಮುಖದಿಂದ ಹೊರಟ ಸುರುಳಿಯಾಕಾರದ ಬಳ್ಳಿಯು ತೋರಣದ ಉಳಿದ ಭಾಗವನ್ನು ತುಂಬಿದೆ. ಈ ತೋರಣದ ಎರಡೂ ಕಡೆ ಚಾಮರಧಾರಿಗಳಿದ್ದಾರೆ.

ಇದರ ಪಕ್ಕದಲ್ಲಿಯೇ ಇರುವ ಇನ್ನೊಂದು ತೀರ್ಥಂಕರ ವಿಗ್ರಹವೂ ಪದ್ಮಪೀಠದ ಮೇಲೆ ಸಿದ್ಧಾಸನದಲ್ಲಿ ಕುಳಿತಿದ್ದು, ಧ್ಯಾನಮುದ್ರೆಯಲ್ಲಿದೆ. ಈ ಶಿಲ್ಪದ ತೋರಣವು ೯೮ ಸೆಂ.ಮಿ. ಅಗಲ, ೧೩೮ ಸೆಂ.ಮಿ. ಎತ್ತರವಿದೆ. ಮೂರ್ತಿಯು ೭೭ ಸೆಂ.ಮಿ. ಎತ್ತರವಿದೆ. ಪ್ರಭಾಮಂಡಲದ ಇಕ್ಕೆಲಗಳಲ್ಲಿ ಸುರುಳಿಗಳಿದ್ದು, ಮಧ್ಯ

1 ಸದಾನಂದ ನಾಯಕ: ಸಾಹಿತ್ಯ ಸಂಶೋಧನೆ ಮತ್ತು ಸಮಾಲೋಚನೆ, ಪು. ೯೦-೯೮

ದಲ್ಲಿ ಮುಕ್ಕೊಡೆಯಿದೆ. ಮಕರತೋರಣಕ್ಕೆ ಎರಡೂ ಬದಿಯಲ್ಲಿ ಸಿಂಹಗಳಿರುವ ಕಂಬಗಳು ಆನೆಯ ತಲೆಯ ಮೇಲೆ ನಿಂತಿವೆ. ಸಣ್ಣ ಎರಡು ಜಿನ ವಿಗ್ರಹಗಳು ಅರ್ಧ ಗಂಬಗಳ ಮೇಲೆ ಇವೆ. ಇಬ್ಬರು ಚಾಮರಧಾರಿಗಳು ಮಕರತೋರಣದ ಎರಡೂ ಕಡೆ ಇದ್ದಾರೆ. ಬಳ್ಳಿಗಳು ಮತ್ತು ಸರ್ಪಗಳು ಸಿಂಹದ ಬಾಯಿಂದ ಬಂದಂತೆ ತೋರಿಸಲಾಗಿದೆ. ಬಳ್ಳಿಗಳ ಸುರುಳಿಗಳಲ್ಲಿ ವಾದ್ಯ ಊದುವವರನ್ನೂ, ತಾಳ ಬಾರಿಸುವವರನ್ನೂ ಮತ್ತು ಮೂಲ ವಾಹಕರನ್ನೂ ಚಿತ್ರಿಸಲಾಗಿದೆ. ಈ ಜಿನಶಿಲ್ಪದ ಪೀಠದ ಎದುರು ಮುಖದಲ್ಲಿರುವ ಶಾಸನವು ಮೂಲಸಂಘದ ಕಾಣೂರ್ಗಣದ ಮೇಘ ಪಾಷಾಣಗಚ್ಛವನ್ನು ಹೆಸರಿಸುತ್ತದೆ. ಆದ್ದರಿಂದ ಈ ವಿಗ್ರಹವು ಮೇಘ ಪಾಷಾಣಗಚ್ಛದ ಒಬ್ಬ ಜೈನನಿಂದ ಮಾಡಿಸಲ್ಪಟ್ಟಿರಬೇಕು.

ಮೊದಲನೆ ಶಾಸನದಲ್ಲಿ ಬರುವ ಮಲ್ಲಿದೇವನನ್ನು ಕುರಿತ ವಿವರಣೆ ಕೊಡುವ ಶಾಸನಗಳು ಗುಂಡಬಾಳ ಮತ್ತು ಇದರ ಸುತ್ತಮುತ್ತ ದೊರಕಿದ್ದು ಇವನ ಕಾಲವನ್ನು ಕ್ರಿ.ಶ. ೧೧೪೦–೪೩ ಎಂದು ನಿರ್ಧರಿಸಬಹುದು.

ಈ ಮಲ್ಲಿದೇವನು ಶಿಸುಗಲಿಯಿಂದ ರಾಜ್ಯವಾಳಿದ ಪಾಂಡ್ಯವಂಶದ ಜನೇ ದೊರೆಯಾಗಿದ್ದಾನೆ. ಶಾಸನ-ಶಿಲ್ಪಗಳ ಆಧಾರದ ಮೇಲೆ ಗುಂಡಬಾಳವು ಜೈನ ಸಂಸ್ಕೃತಿಯ ಒಂದು ಕೇಂದ್ರವಾಗಿತ್ತೆಂದು ಹೇಳಬಹುದು. ಡಾ॥ ಶ್ರೀನಿವಾಸ ಪಾಡಿಗಾರ ಅವರು ಈ ಶಾಸನಗಳು ಮತ್ತು ವಿಗ್ರಹಗಳು ಸಿಕ್ಕ ಗುಂಡಬಾಳವೇ ಶಿಸುಗಲಿಯಾಗಿದ್ದು, ಗುಂಡಬಾಳದ ಸಂಸ್ಕೃತ ರೂಪ ಶಿಸುಗಲಿಯೆಂದು ಹೇಳಿದ್ದಾರೆ.[2]

ಆದ್ದರಿಂದ ಈ ವಿಗ್ರಹವು ಸುಮಾರು ೧೨ನೇ ಶತಮಾನದ ಪೂರ್ವಾರ್ಧದಲ್ಲಿ ನಿರ್ಮಿತವಾಗಿದೆ ಎಂಬುದು ನಿರ್ವಿವಾದ. ಈ ಕಾಲದಲ್ಲಿ ಕಲ್ಯಾಣದಲ್ಲಿ ಚಕ್ರಾಧಿಪತ್ಯವನ್ನು ನಡೆಸುತ್ತಿದ್ದ ಚಾಲುಕ್ಯರು ತಮ್ಮದೇ ಆದ ಶಿಲ್ಪ ಶೈಲಿಯನ್ನು ಸೃಷ್ಟಿಸಿದ್ದರು. ಆದರೆ ಈ ಜಿನಶಿಲ್ಪಗಳು ಕಲ್ಯಾಣ ಚಾಲುಕ್ಯ ಶೈಲಿಗಿಂತ ತುಸು ಭಿನ್ನವಾದ ಶೈಲಿಯಲ್ಲಿ ಕಡೆಯಲ್ಪಟ್ಟಿದ್ದು, ಇದು ಪ್ರಾದೇಶಿಕ ಶೈಲಿಯ ಪ್ರಭಾವವೋ ಎಂದು ಸಂಶಯ ಬರುತ್ತದೆ. ಇದಕ್ಕೆ ನಿದರ್ಶನವೆಂದರೆ ಪೀಠದ ಒಳಹೊಕ್ಕ ಭಾಗದ ಮೇಲೆ ಇರುವ ಶಾಸನ. ಜಿನನ ವಿಶಾಲವಾದ ವಕ್ಷಸ್ಥಳ, ಬಲಿಷ್ಠವಾದ ಭುಜ ಮತ್ತು ಕಂಠದ ಭಾಗವು ಸಣ್ಣದಾಗಿದ್ದು ಪ್ರಮಾಣಬದ್ಧತೆಯ ಕೊರತೆಯಿದೆ. ಶಾಸನವಿಲ್ಲದಿದ್ದರೆ ಇದನ್ನು ಬಹುಶಃ ರಾಷ್ಟ್ರಕೂಟ-ಕಲ್ಯಾಣ ಚಾಲುಕ್ಯರ ಸಂಕ್ರಮಣ ಕಾಲದ್ದೆಂದು ಭಾವಿಸುತ್ತಿದ್ದೆವೇನೋ ! ಈ ಶಿಲ್ಪಕ್ಕೆ ಸಂಬಂಧಪಟ್ಟ ಯಾವುದೇ ಭಾಗದಲ್ಲಿ ಯಕ್ಷ–ಯಕ್ಷಿಯರು ಅಥವಾ ಲಾಂಛನ ಇವುಗಳು ಚಿತ್ರಿಸಲ್ಪಟ್ಟಿಲ್ಲವಾದ್ದರಿಂದ ಈ ವಿಗ್ರಹಗಳು ಪ್ರತಿನಿಧಿಸುವ ತೀರ್ಥಂಕರರಾರು ಎಂದು ನಿರ್ಧರಿಸುವುದು ಕಷ್ಟಕರ.[3]

ಶಾಸನಗಳ ಪಾಠ ಈ ಕೆಳಗಿನಂತಿದೆ :

**ಮೊದಲನೆಯ ವಿಗ್ರಹದ ಪೀಠಶಾಸನ**

೧. ಸ್ವಸ್ತಿ ಶ್ರೀ ಮೂಲಸಂಘದ ಸೂರಸ್ಥ ಗಣದ ಮುತ್ತುಗಡಿ ದೇವರ ಪ್ರತಿಬದ್ಧದ ಚಾರುಕೀ

೨. ರ್ತಿ ಸಿದ್ಧಾಂತಿ ದೇವರ ಗುಡ್ಡಿ ಶ್ರೀಮತು ಹಯ್ವಲದೇವಿಯರ ಮಗಳು ನಾಗ

೩. ಲ ದೇವಿಯರ ಮಗಂ ಶ್ರೀಮತು ಮಲ್ಲಿ ದೇವರಸರು ಮಾಡಿಸಿದ ಪ್ರತಿಷ್ಠೆ

**ಎರಡನೆಯ ವಿಗ್ರಹದ ಪೀಠಶಾಸನ**

೧. ಶ್ರೀ ಮೂಲಸಂಘ ಕಾಣೂರ್ಗಣ ಮೇಘ (ಪ?) ಪಾಷಾಣ ಗಚ್ಛ ಮಂಗಳ ○

---

2 ಶ್ರೀನಿವಾಸ ಪಾಡಿಗಾರ: "ಸಮ್ ಇನ್‌ಸ್ಕ್ರಿಪ್‌ಷನ್ಸ್ ಆಫ್ ಚಂದಾವರ ಕದಂಬಾಸ್" ಸೆಮಿನಾರ ಆನ್ ದಿ ಹಿಸ್ಟರಿ ಆಫ್ ಕಾರವಾರ ಡಿಸ್ಟ್ರಿಕ್ಟ್, ೧೦-೧೧, ಫೆಬ್ರವರಿ ೧೯೯೦

3 ಶ್ರೀನಿವಾಸ ಪಾಡಿಗಾರ: ಮತ್ತು ಎಸ್. ಗಣಪತಿಗೌಡಾ "ಚಂದಾವರ ಕದಂಬ ತ್ರಿಭುವನಮಲ್ಲ ಮಲ್ಲಿದೇವನ ಗುಂಡಬಾಳದ ಶಾಸನ, ಶಕವರ್ಷ ೧೦೬೩" ಕರ್ನಾಟಕ ಭಾರತಿ, ಸಂಪುಟ ೨೨, ಸಂಚಿಕೆ ೩, ಧಾರವಾಡ ೧೯೯೦, ಪು. ೭೮-೯೦

## ಕೃತಜ್ಞತೆಗಳು

ನಮ್ಮ ಅಧ್ಯಯನದಲ್ಲಿ ಗುಂಡಬಾಳದಲ್ಲಿ ನೀಡಿದ ಸಹಕಾರಕ್ಕಾಗಿ ಗುಂಡಬಾಳ ಪದ್ಮಾವತಿ ಅಮ್ಮನವರ ಜೈನ ಬಸ್ತಿಯ ಅರ್ಚಕ ಶ್ರೀ ಶಾಂತರಾಜನ್ ಪದ್ಮಯ್ಯಸೆಟ್ಟಿ ಮತ್ತು ಇತರ ಅರ್ಚಕ ವರ್ಗದವರಿಗೆ ; ಶಾಸನಗಳನ್ನು ಓದಿ ಕೊಟ್ಟ ಡಾ|| ಶ್ರೀನಿವಾಸ ಪಾಡಿಗಾರ, ಅಧ್ಯಾಪಕ, ಪ್ರಾಚೀನ ಭಾರತದ ಚರಿತ್ರೆ ಮತ್ತು ಶಾಸನ ವಿಜ್ಞಾನ ವಿಭಾಗ, ಕ.ವಿ.ವಿ. ಧಾರವಾಡ ಇವರಿಗೆ ; ಹಾಗೂ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ನನ್ನ ಮಿತ್ರ ಶ್ರೀ ಪ್ರಮೋದ ಹೆಗಡೆಯವರಿಗೆ ಅನಂತ ಧನ್ಯವಾದಗಳು.